# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 85 (874)

2) ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 28-09-2020.

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಪರಿಸರ ಸೂಕ್ಷ್ಮ ವಲಯ ಕಡಿತ ಈಗಾಗಲೇ ಪರಿಸರ ಪ್ರೇಮಿಗಳು ಮತ್ತು ಪರಿಣಿತರ ಆಕ್ರೋಶಕ್ಕೆ ಕಾರಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಈ ಕುರಿತು ಪರಿಸರ ಪ್ರೇಮಿಗಳು ಮತ್ತು ಕೆಲವು ಸಾರ್ವಜನಿಕರಿಂದ ಮನವಿಗಳು ಸ್ವೀಕೃತವಾಗಿವೆ. |
| ಆ) | ಸೂಕ್ಷ್ಮ ಜೈವಿಕ ವಲಯವನ್ನು ಅಭಿವೃದ್ಧಿಯ ನೆಪವೊಡ್ಡಿ ಕಡಿತಗೊಳಿಸುವ ಸರ್ಕಾರದ ನಿರ್ಧಾರದ ಹಿಂದಿನ ಉದ್ದೇಶವೇನು; (ವಿವರ ನೀಡುವುದು) | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಪರಿಸರ ಸೂಕ್ಷ್ಮ ವಲಯದ ಪ್ರಸ್ತಾವನೆಯನ್ನು ರಾಜ್ಯದ ಸಚಿವ ಸಂಪುಟದ ಉಪ ಸಮಿತಿ ಮತ್ತು ಕೇಂದ್ರದ ಪರಿಸರ ಸೂಕ್ಷ್ಮ ವಲಯದ ತಜ್ಞರ ಸಮಿತಿಯಲ್ಲಿ ಚರ್ಚಿಸಿದ ನಂತರವೇ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದೆ.<br><br>ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನವು ಬೆಂಗಳೂರು ನಗರಕ್ಕೆ ಬಹಳ ಸಮೀಪದಲ್ಲಿರುವುದರಿಂದ, ಇಂತಹ ಖಾಸಗಿ ಪ್ರದೇಶದಲ್ಲಿ ಕನಿಷ್ಠ ವಿಸ್ತೀರ್ಣದ ಪರಿಸರ ಸೂಕ್ಷ್ಮ ವಲಯವನ್ನು ನಿಗದಿಪಡಿಸುವುದು ಅನಿವಾರ್ಯವಾಗಿತ್ತು. ಪ್ರಸ್ತುತ, ಅಂತಿಮ ಅಧಿಸೂಚನೆಯಲ್ಲಿ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಸುತ್ತಲಿನ ಖಾಸಗಿ ಜಮೀನು ಇರುವ ಕಡೆಗಳಲ್ಲಿ ಮಾತ್ರ ಪರಿಸರ ಸೂಕ್ಷ್ಮ ವಲಯವನ್ನು ಕನಿಷ್ಠಗೊಳಿಸಲಾಗಿರುತ್ತದೆ. |
| ಇ) | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಈ ಪರಿಸರ ಸೂಕ್ಷ್ಮ ವಲಯ ಆನೆ ಕಾರಿಡಾರ್ ಸಹ ಆಗಿರುವುದನ್ನು ಸರ್ಕಾರ ಗಮನಿಸಿದೆಯೇ; ಈ ಕುರಿತಾಗಿ ಕಾನೂನು ಹೋರಾಟ ಚಾಲ್ತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ವೈಲ್ಡ್‌ಲೈಫ್ ಟ್ರಸ್ಟ್ ಆಫ್ ಇಂಡಿಯಾರವರು ಪ್ರಕಟಿಸಿರುವ "ರೈಟ್ ಆಫ್ ಪ್ಯಾಸೇಜ್" ನಲ್ಲಿ ನಮೂದಿಸಲಾಗಿರುವ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಕರಡಿಕಲ್– ಮಹದೇಶ್ವರ, ಬಿಳಿಕಲ್ –ಜವಲಗಿರಿ ಮತ್ತು ತಾಲಿ – ಬಿಳಿಕಲ್ ಎಂಬ ಮೂರು ಆನೆ ಕಾರಿಡಾರ್‌ಗಳು ಸೇರಿದ್ದು, ಈ ಆನೆ ಕಾರಿಡಾರ್‌ಗಳು ಮೀಸಲು ಅರಣ್ಯ/ ಪ್ರಸ್ತುತ ಅಂತಿಮಗೊಂಡಿರುವ ಪರಿಸರ ಸೂಕ್ಷ್ಮ ವಲಯದ ಅಧಿಸೂಚನೆಯ ವ್ಯಾಪ್ತಿಯಲ್ಲಿ ಬರುತ್ತವೆ.<br><br>ಈ ವಿಷಯದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿರುತ್ತದೆ. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ಸ್ಥಳೀಯ ರೈತರು, ಪರಿಸರವಾದಿಗಳು ಮತ್ತು ಮಾಧ್ಯಮಗಳು ಇದು ಪರಿಸರ ವಿರೋಧಿ ಕ್ರಮ ಎಂದು ಆರೋಪಿಸುತ್ತಿರುವುದು ನಿಜವೇ; | ಈಗಾಗಲೇ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಪ್ರಸ್ತುತ, ಸದರಿ ವಿಷಯದ ಕುರಿತು ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿರುತ್ತದೆ. |

ಸಂಖ್ಯೆ: ಅಪಜೀ 162 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು